ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

ರೈತರಿಂದ ಭತ್ತ ಖರೀದಿ ಮಾಡುವ ಕುರಿತು

ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) :-

127 (201) ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಪ್ರತಿ ವರ್ಷ ಕೇಂದ್ರ ಸರ್ಕಾರದ ಆರ್ಥಿಕ ನೆರವಿನೊಂದಿಗೆ ರಾಜ್ಯ ಸರ್ಕಾರವು ರೈತರಿಂದ ಭತ್ತ ಖರೀದಿ ಮಾಡುತ್ತಿದೆಯೇ ;

(ಆ) ಖರೀದಿ ಮಾಡಲಾದ ಭತ್ತವನ್ನು ಸ್ಥಳೀಯ ನೋಂದಾಯಿತ ಅಕ್ಕಿ ಗಿರಣಿಗಳಿಂದ ಭತ್ತವನ್ನು ಹಲ್ಲಿಂಗ್ ಮಾಡಲು ಕ್ವಿಂಟಾಲ್ ಒಂದಕ್ಕೆ ರೂ. 10/- ನಿಗಧಿಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಹಾಗಾದರೆ, ಸದರಿ ದರವನ್ನು ಯಾವ ಸಾಲಿನಿಂದ ನಿಗಧಿಗೊಳಿಸಲಾಗಿದೆ ;

(ಈ) ಸದರಿ ರೂ.10/- ದರವನ್ನು ದೀರ್ಘ ಕಾಲದಿಂದ ಪರಿಷ್ಕರಿಸದಿರಲು ಕಾರಣಗಳೇನು ; (ವಿವರಗಳೊಡನೆ)

(ಉ) ಯಾವ ಕಾಲಮಿತಿಯಲ್ಲಿ ಸದರಿ ದರವನ್ನು ಪರಿಷ್ಕರಿಸಲಾಗುವುದು?